# ಕೀರ್ತನ

(ಸಾಮಾಜಿಕ ಪ್ರಹಸನ)








— ಲೇಖಕರು —

ಎನ್. ಟಿ. ಕುಲಕರ್ಣಿ, ಬಿ.ಎ., ಬಿ.ಟಿ. L. H. School, HUBLI

— ಪ್ರಕಾಶಕರು —

ಕೆ. ಎಸ್. ಕುಲಕರ್ಣಿ ಬುಕ್‌ಡಿಪೋ,
ಸ್ಟೇಶನ್‌ರೋಡ, ಹುಬ್ಬಳ್ಳಿ

— ಮುದ್ರಕರು —

ಎಸ್. ಎಸ್. ಕಾರಂತ
ಆಶಾ ಪ್ರೆಸ್, ರಾಧಾಕೃಷ್ಣಗಲ್ಲಿ, ಹುಬ್ಬಳ್ಳಿ



ಬೆಲೆ: ಐದು ಆಣೆ

# ಕೀರ್ತನ

## ಪಾತ್ರಗಳು

೧ ರಾಮರಾಯ:— ಜಿಪುಣ ಸಾಹುಕಾರ
೨ ಭೀಮಣ್ಣ:— ರಾಮರಾಯನ ಗೆಳೆಯ
೩ ಜಾನಕೀಬಾಯಿ — ರಾಮರಾಯನ ಹೆಂಡತಿ
೪ ಬಾಬು:— ರಾಮರಾಯನ ಏಕಮಾತ್ರ ಪುತ್ರ
೫ ಮಲ್ಲ:— ರಾಮರಾಯನ ಮನೆ ಆಳು
೬ ಭಿಕ್ಷುಕರು ೭ ಶಂಕರಶಾಸ್ತ್ರಿ
೮ ದೇಶಾವರಿ ಬ್ರಾಹ್ಮಣ
೯ ವರ್ತಮಾನಪತ್ರಗಳನ್ನು ಮಾರುವ ಹುಡುಗ

## — ದೃಶ್ಯ ೧ —

### ಸ್ಥಳ:— ರಸ್ತೆ

### ಕಾಲ:— ಸಾಯಂಕಾಲ ೬ ಘಂಟೆ

( ರಾಮರಾಯನು ಪಲ್ಲೇಪೇಟೆಯಿಂದ ಮನೆಯ ರಸ್ತೆ ಹಿಡಿದು ನಡೆದಿದ್ದಾನೆ. ತಲೆಯ ಮೇಲೆ ಹಳೇ ಟೊಪೀ ರುಮಾಲ, ಮೈಮೇಲೆ ಕಿಸೇ ಹರಿದ ಕೋಟು, ಮೇಲೆ ಹಾಸಿದ ಶೆಲ್ಲೆ, ಕಾಲಲ್ಲಿ ಹಳೆಯ ಮೆಟ್ಟು. ಉಟ್ಟ ಧೋತರ ಮಾಸಿದೆ, ಬಲಗೈಯಲ್ಲಿ ಕೈಕೋಲು, ಎಡಗೈಯಲ್ಲಿ ಕೈಚೀಲ ಮೂಲಂಗಿ, ಹರವೀ ಸೊಪ್ಪುಗಳತುದಿ ಚೀಲದಿಂದ ಹೊರಬಂದಿವೆ. ರಸ್ತೆಗುಂಟ ಹೋಗುವಾಗ್ಗೆ )

**ರಾಮರಾಯ:—** ( ತನ್ನಷ್ಟಕ್ಕೆ ವಿಚಾರ ಮಾಡುತ್ತ ) ನಾ ಮನೀಂದಾ ತಂದದ್ದು ಏಳು ಬಿಲ್ಲಿ. (ಒಳಕಿಸೆಯಲ್ಲಿ ಕೈ ಹಾಕಿ) ಕಿಸೇದಾಗ ಉಳಿದದ್ದು ಒಂದು ಬಿಲ್ಲಿ. ನಾ ಕೊಂಡದ್ದರ ಏನು! (ಕೈಕೋಲು ಬಗಲಲ್ಲಿಟ್ಟು ಬೆಟ್ಟಿನಿಂದ ಎಣಿಕೆ ಹಾಕುವನು) ಒಂದು ಬಿಲ್ಲಿ ಮೂಲಂಗಿ, ಎರಡು ಬಿಲ್ಲಿ ಹರವೀ ಸೊಪ್ಪು, ಮೂರು ಬಿಲ್ಲಿ. ಮತ್ತೇನ ಕೊಂಡೆ? ( ನೆನಪಾದವನಂತೆ ) ಹಾ! ಒಂದು ಬಿಲ್ಲೀ ಹಸೀಮೆಣಸಿನಕಾಯಿ ಒಂದು ಆಣೆ ಆತು. ಒಂದು ಬಿಲ್ಲೀ ಕರಬೇವು, ಕೋತಂಬರಿ ಐದು ಬಿಲ್ಲಿ ಆತು. ಕಿಸೇದಾಗ ಒಂದು ಬಿಲ್ಲಿ ಉಳಿತು. ಹಂಗರ ಇನ್ನೊಂದು ಬಿಲ್ಲಿ ಏನಾತು? ಯಾರಿಗ್ಯಾರ ಒಂದು ಬಿಲ್ಲಿ ಹೆಚ್ಚಿಗೇನ ಕೊಟ್ಟೆನೋ ಅಥವಾ ಎಲ್ಲ್ಯಾರ ಬಿದ್ದss ಹೋಯ್ತು? (ಕಿಸೆಹಿಡಿದು) ಕಿಸೇನರ ತೂತ ಬಿದ್ದಿಲ್ಲ, ನಾನರ ಯಾರಿಗೂ ಏನೂ ಕೊಟ್ಟಿಲ್ಲಾ. ಕೊಡುವವನೂ ಅಲ್ಲ. ಹಂಗರss ಎಲ್ಲಿ ಹೋತು? (ಕೈ ಚೀಲ, ಕೋಲು ಕೆಳಗಿಟ್ಟು ಕಿಸೆಗಳನ್ನು ಹುಡುಕ ಹತ್ತುವನು. ಒಬ್ಬ ಕುಂಟನು ರಾಯನ ಹತ್ತರ ಬಂದು)

**ಕುಂಟ:—** ಯಪ್ಪಾ ಒಂದು ದುಡ್ಡು ಕೊಡ್ರಿ ಕುಂಟಗ. ಮುಂಜೇಲಿಂದಾ ಕೂಳಿಲ್ಲ.

ರಾಮರಾಯ:— ಹೇ! ಹೋಗೋ ಅತ್ಲಾಗ.

ಕುಂಟಿ:— ಯಪ್ಪಾ ನಮನಾಣಿ ಕೊಡ್ರಿ. ಹೊಟ್ಟಿ ಬಾಳ ಹಸ್ತೇತಿ.

ರಾಮರಾಯ:— ( ಸಿಟ್ಟಿನಿಂದ ) ಹೋಗೋ ಅತ್ಲಾಗ! ನಾನss ದುಡ್ಡು ಕಳಕೊಂಡು ಹುಡುಕಾಡಲಿಕ್ಹತ್ತೇನಿ; ಈ ಮಗ ಬಂದ ದುಡ್ಡು ಕೊಡು ಅಂತಾನ. ಹೋಗ, ನಡೀ.

ಕುಂಟಿ:— ಯಪ್ಪಾ .... ....

ರಾಮರಾಯ:— ಯಾಕ ಪೋಲೀಸರಿಗೆ ಹೇಳ್ಲಿ (ಪೋಲೀಸನನ್ನು ಕರೆಯುವಂತೆ) ಏ, ಪೋಲೀಸ, ಪೋಲೀಸ, ಈ ಕುಂಟಿ ನನ್ನ ಕಿಸೇದಾಗಿನ ಬಿಲ್ಲೀ ತುಡುಗ ಮಾಡ್ಯಾನ ಬಾರೋ ಇಲ್ಲಿ.

ಕುಂಟಿ:— (ಗಾಬರಿಯಿಂದ) ಏನ್ರೀ ಯಪ್ಪಾ, ನಾನss ನಿಮಗ ಒಂದು ದುಡ್ಡು ಕೊಡ್ರಿ ಅಂದ್ರ ನನ್ನ ಮ್ಯಾಲss ಕಳವು ಹೇರ್ತೀರಿ. ಯಾಕ ಕೊಡುದಿಲ್ಲಾ ಅಂತಾ ಹೇಳ್ರಿ, ನಾ ಹೋಕ್ಕೇನಿ. ಸುಳ್ಳ ಸುಳ್ಳ ಬಿಕ್ಷಾದವರ ಮ್ಯಾಲ ಯಾಕ ಕಳವು ಹೇರ್ತೀರಿ. ನಿಮ್ಮಂತವರss ಇರಬೇಕ ನೋಡ್ರಿ ಜಗತ್ತ್ಯಾಗ. (ಹೋಗುವನು)

ರಾಮರಾಯ:— ಹಂಗರ ಒಂದು ಬಿಲ್ಲಿ ಎಲ್ಲಿಗೋತು? (ದಾರಿಗುಂಟ ಹುಡುಕಹತ್ತುವನು. ಮತ್ತೊಬ್ಬ ಭಿಕ್ಷುಕನು ರಾಯನ ಎದುರಿಗೆ ಬಂದು)

ಭಿಕ್ಷುಕ:— ಯಪ್ಪಾ, ಸಲಾಮು ಮಾಡ್ತೇನಿ ಒಂದು ಬಿಲ್ಲಿ ಕೊಡ್ರಿ. ನಾ ಪರದೇಶಿ. ನನಗ ತಂದಿ ಇಲ್ಲಾ, ತಾಯಿ ಇಲ್ಲಾ.

ರಾಮರಾಯ:—ಹೇ, ನಡೀ ಅತ್ಲಾಗ. (ಕೈಯೊಳಗಿನ ಕೋಲಿನಿಂದ ಹೊಡೆಯಲು ಹೋಗುವನು)

ಭಿಕ್ಷುಕ:— ಹೊಡೀಬ್ಯಾಡ್ರೀ ಯಪ್ಪಾ. ನೀವ ಕೊಡದಿದ್ರ ಅಷ್ಟ ಹೋತು. ನಾ ಹೋಕ್ಕೇನ್ರಿ. ದಾನ ಧರ್ಮ ಮಾಡುದು ಬಿಟ್ಟಗೊಟ್ಟ ಹೊಡ್ತಾ ಕೊಡಾಕ ಹತ್ತೀರಲ್ಲ್ರೀ ಸಾವಕಾರss .

ರಾಮರಾಯ:-- ಎಲಾ ಇವನ (ತನ್ನಷ್ಟಕ್ಕೆ) ಕಿಸೇದಾಗಿನ ಬಿಲ್ಲಿ ಹೋದದ್ದೊಂದು ಸಂಕಟ. ಪ್ಯಾಲ ಈ ತಿರುಕರದೊಂದು ಕಾಟ. (ಗಟ್ಟಿಯಾಗಿ) ಯಾಕೋ, ಹೋಗ್ತೀಯೋ ಪೋಲೀಸರನ ಕರಿಲೋ.

ಭಿಕ್ಷುಕ:— ಪೋಲೀಸರು ಬಂದರ ನಮ್ಮ ಹೊಟ್ಟಿ ತುಂಬತತಿ? ಒಂದು ಬಿಲ್ಲೀ ಕೊಟ್ಟರ ನಿಮ್ಮ ಮಕ್ಕಳೂ ಮರೀಗೆ ಪುಣ್ಯೇ ಬರತೈತ್ರಿ.

ರಾಮರಾಯ:—ಹೂಂ, ಪುಣ್ಯಾ ಬರತೈತಿ. ಈಗ ನಾನss ರೊಕ್ಕಾ ಕಳಕೊಂಡೀನಿ. ನಿನಗೇನರ ಸಿಕ್ಕಿದೇನ ಒಂದು ಬಿಲ್ಲಿ?

ಭಿಕ್ಷುಕ:— ಅಯ್ಯೋ ಮಾರಾಯಾ, ಕೇಳಿಪ್ರ ಬಿಲ್ಲೀ ಕೊಡದಿದ್ದವ್ರು ಎಂದಾರss ಕಳಕೊಂಡಾರ್ರೀ ?

ರಾಮರಾಯ:— ಯಾಕೋ ಚಾಷ್ಟೀಮಾಡ್ತೀ. ನೀ ಏನss ನಿನ್ನ ಕಿಮ್ಮತ್ತಿಷ್ಟು. ಸುಮ್ಮಸs ಭಿಕ್ಷಾ ಬೇಡಿಕೊಂಡು ಹೋಗು.

ಭಿಕ್ಷುಕ — ಯಪ್ಪಾ, ಒಂದು ಬಿಲ್ಲೀ ಭಿಕ್ಷಾ ಕೊಡ್ರೀ.

ರಾಮರಾಯ:— ಏನ ಗಂಟಿ ಬಿದ್ನಪಾ ಇವಾ ನನಗ ಅಂತೀನಿ. (ಗಟ್ಟಿಯಾಗಿ) ಏ,ನಾ ಖರೇ ಅಂದ್ರೂ ಒಂದುಬಿಲ್ಲಿ ಕಳಕೊಂಡೀನಿ. ಹಿಂಗss ರಸ್ತೆಗುಂಟಿ ಹೋಗು. ಸಿಕ್ರ ಅದರ ಒಂದು ದೀಡಪೈ ನಿನಗ; ಒಂದ ದೀಡಪೈ ನನಗ ತಿಳೀತ.

ಭಿಕ್ಷುಕ::— ಅಬ್ಬಬ್ಬಾ, ದಾನಸೂರ ಕರ್ಣಾ, ಬ್ಯಾಡ್ರೀ ಯಪ್ಪಾ ನಾ ಹೋಗ್ತೀನಿ. ನಿಮ್ಮ ಬಿಲ್ಲಿ ಬ್ಯಾಡ ಗಿಲ್ಲಿ ಬ್ಯಾಡ.(ಹೋಗುವನು)

ರಾಮರಾಯ:-ಹೂಂ!ಮಕ್ಕಳ. ದುಡಿಂಗಿಲ್ಲ ದುಃಖಬಡೊಂಗಿಲ್ಲಾ. ಪುಕ್ಕಟಿ ದುಡ್ಡು ಬೇಕಂತ. ಕೇಳಿದವರಿಗೆಲ್ಲ ಕೊಟ್ಟು ನಾನೂ ನಿಮ್ಮಂಗ ಹೆರವರಿಗೆ ಕೈವೊಡ್ಡ ಬೇಕಾದೀತು. ಹಾ! ಈ ಪೀಡಾ ರಂಡೇ ಮಗ ಹೋದ. ಹೋಗಲಿ, ಹಂಗರ ಒಂದ ಬಿಲ್ಲಿ ಎಲ್ಲಿ ಹೋತು? (ಗದ್ದ, ಕುತಿಗಿ ಕೆರೆಯುತ್ತ

**ರಾಮರಾಯ:**— ಹೇ! ಹೋಗೋ ಅತ್ಲಾಗ.

**ಕುಂಟ:**— ಯಪ್ಪಾ ಹಸುವಾವಿ ಕೊಡ್ರಿ. ಹೊಟ್ಟಿ ಬಾಳ ಹಸ್ತೇತಿ.

**ರಾಮರಾಯ:**— (ಸಿಟ್ಟಿನಿಂದ) ಹೋಗೋ ಅತ್ಲಾಗ! ನಾನss ದುಡ್ಡು ಕಳಕೊಂಡು ಹುಡುಕಾಡಲಿಕ್ಕೆ ಹತ್ತೇನಿ; ಈ ಮಗ ಬಂದ ದುಡ್ಡು ಕೊಡು ಅಂತಾನ. ಹೋಗ, ನಡೀ.

**ಕುಂಟ:**— ಯಪ್ಪಾ .... ....

**ರಾಮರಾಯ:**— ಯಾಕ ಪೋಲೀಸರಿಗೆ ಹೇಳ್ಲಿ (ಪೋಲೀಸನನ್ನು ಕರೆಯುವಂತೆ) ಏ, ಪೋಲೀಸ, ಪೋಲೀಸ, ಈ ಕುಂಟ ನನ್ನ ಕಿಸೇದಾಗಿನ ಬಿಲ್ಲೀ ತುಡುಗ ಮಾಡ್ಯಾನ ಬಾರೋ ಇಲ್ಲೆ.

**ಕುಂಟ:**— (ಗಾಬರಿಯಿಂದ) ಏನ್ರೀ ಯಪ್ಪಾ, ನಾನss ನಿಮಗ ಒಂದು ದುಡ್ಡು ಕೊಡ್ರಿ ಅಂದ್ರ ನನ್ನ ಮ್ಯಾಲss ಕಳವು ಹೇರ್ತೀರಿ. ಯಾಕ ಕೊಡುದಿಲ್ಲಾ ಅಂತಾ ಹೇಳ್ರಿ, ನಾ ಹೋಕ್ಕೇನಿ. ಸುಳ್ಳ ಸುಳ್ಳ ಭಿಕ್ಷಾದವರ ಮ್ಯಾಲ ಯಾಕ ಕಳವು ಹೇರ್ತೀರಿ. ನಿಮ್ಮಂತವರss ಇರಬೇಕ ನೋಡ್ರಿ ಜಗತ್ತ್ಯಾಗ. (ಹೋಗುವನು)

**ರಾಮರಾಯ:**— ಹಂಗರ ಒಂದು ಬಿಲ್ಲಿ ಎಲ್ಲಿಗೋತು? (ದಾರಿಗುಂಟ ಹುಡುಕಹತ್ತುವನು. ಮತ್ತೊಬ್ಬ ಭಿಕ್ಷುಕನು ರಾಯನ ಎದುರಿಗೆ ಬಂದು)

**ಭಿಕ್ಷುಕ:**— ಯಪ್ಪಾ, ಸಲಾಮು ಮಾಡ್ತೇನಿ ಒಂದು ಬಿಲ್ಲಿ ಕೊಡ್ರಿ. ನಾ ಪರದೇಶಿ. ನನಗ ತಂದಿ ಇಲ್ಲಾ, ತಾಯಿ ಇಲ್ಲಾ.

**ರಾಮರಾಯ:**—ಹೇ, ನಡೀ ಅತ್ಲಾಗ. (ಕೈಯೊಳಗಿನ ಕೋಲಿನಿಂದ ಹೊಡೆಯಲು ಹೋಗುವನು)

**ಭಿಕ್ಷುಕ:**— ಹೊಡೀಬ್ಯಾಡ್ರೀ ಯಪ್ಪಾ. ನೀವ ಕೊಡದಿದ್ರ ಅಷ್ಟ ಹೋತು. ನಾ ಹೋಕ್ಕೇನ್ರಿ. ದಾನ ಧರ್ಮ ಮಾಡುದು ಬಿಟ್ಟಗೊಟ್ಟ ಹೊಡ್ತಾ ಕೊಡಾಕ ಹತ್ತೀರಲ್ಲ್ರೀ ಸಾವಕಾರss .

ರಾಮರಾಯ:-- ಎಲಾ ಇವನ (ತನ್ನಷ್ಟಕ್ಕೆ) ಕಿಸೇದಾಗಿನ ಬಿಲ್ಲಿ ಹೋದದ್ದೊಂದು ಸಂಕಟ. ಮ್ಯಾಲ ಈ ತಿರುಕರದೊಂದು ಕಾಟ (ಗಟ್ಟಿಯಾಗಿ) ಯಾಕೋ, ಹೋಗ್ತೀಯೋ ಪೋಲೀಸರನ ಕರಿಲೋ.

ಭಿಕ್ಷುಕ:— ಪೋಲೀಸರು ಬಂದರ ನಮ್ಮ ಹೊಟ್ಟಿ ತುಂಬತತಿ? ಒಂದು ಬಿಲ್ಲೀ ಕೊಟ್ಟರ ನಿಮ್ಮ ಮಕ್ಕಳೂ ಮರೀಗೆ ಪುಣ್ಯೇ ಬರತೈತ್ರಿ.

ರಾಮರಾಯ:—ಹೂಂ, ಪುಣ್ಯಾ ಬರತೈತಿ. ಈಗ ನಾನss ರೊಕ್ಕಾ ಕಳಕೊಂಡೀನಿ. ನಿನಗೇನರ ಸಿಕ್ಕಿದೇನ ಒಂದು ಬಿಲ್ಲಿ?

ಭಿಕ್ಷುಕ:— ಅಯ್ಯೋ ಮಹಾರಾಯಾ, ಕೇಳಿದ್ರ ಬಿಲ್ಲೀ ಕೊಡದಿದ್ದವ್ರು ಎಂದಾರss ಕಳಕೊಂಡಾರ್ರೀ ?

ರಾಮರಾಯ:— ಯಾಕೋ ಚಾಷ್ಟೀಮಾಡ್ತೀ. ನೀ ಏನss ನಿನ್ನ ಕಿಮ್ಮತ್ತಿಷ್ಟು. ಸುಮ್ಮss ಭಿಕ್ಷಾ ಬೇಡಿಕೊಂಡು ಹೋಗು.

ಭಿಕ್ಷುಕ — ಯಪ್ಪಾ, ಒಂದು ಬಿಲ್ಲೀ ಭಿಕ್ಷಾ ಕೊಡ್ರೀ.

ರಾಮರಾಯ:— ಏನ ಗಂಟ ಬಿದ್ದಪಾ ಇವಾ ನನಗ ಅಂತೀನಿ. (ಗಟ್ಟಿಯಾಗಿ) ಏ,ನಾ ಖರೇ ಅಂದ್ರೂ ಒಂದುಬಿಲ್ಲಿ ಕಳಕೊಂಡೀನಿ. ಹಿಂಗss ರಸ್ತೆಗುಂಟ ಹೋಗು. ಸಿಕ್ರ ಅದರ ಒಂದು ದೀಡಪೈ ನಿನಗ; ಒಂದ ದೀಡಪೈ ನನಗ ತಿಳೀತ.

ಭಿಕ್ಷುಕ::— ಅಬ್ಬಬ್ಬಾ, ದಾನಸೂರ ಕರ್ಣಾ, ಬ್ಯಾಡ್ರೀ ಯಪ್ಪಾ ನಾ ಹೋಗ್ತೀನಿ. ನಿಮ್ಮ ಬಿಲ್ಲಿ ಬ್ಯಾಡ ಗಿಲ್ಲಿ ಬ್ಯಾಡ.(ಹೋಗುವನು)

ರಾಮರಾಯ:-ಹೂಂ!ಮಕ್ಕಳ. ದುಡಿಂಗಿಲ್ಲ ದುಃಖಬಡೊಂಗಿಲ್ಲಾ. ಪುಕ್ಕಟಿ ದುಡ್ಡು ಬೇಕಂತ. ಕೇಳಿದವರಿಗೆಲ್ಲ ಕೊಟ್ಟು ನಾನೂ ನಿಮ್ಮಂಗ ಹೆರವರಿಗೆ ಕೈವೊಡ್ಡ ಬೇಕಾದೀತು. ಹಾ! ಈ ಪೀಡಾ ರಂಡೇ ಮಗ ಹೋದ. ಹೋಗಲಿ, ಹಂಗರ ಒಂದ ಬಿಲ್ಲಿ ಎಲ್ಲಿ ಹೋತು? (ಗದ್ದ, ಕುತಿಗಿ ಕೆರೆಯುತ್ತ

ವಿಚಾರಿಸುವನು) ಹಾ! ತಿಳೀತು. ಬಿಲ್ಲಿ! ಬಿಲ್ಲಿ ಹೋಗಿಲ್ಲ (ಆನಂದಪಡುವನು) ಅವಳು ಕೋತಂಬ್ರಿ ಮಾರೋ ಹೆಣ್ಮಗಳು ಒಂದ ಬಿಲ್ಯಾಗ ಕರಬೇವು ಕೋತಂಬ್ರಿ ಬರೋದಿಲ್ಲಾ ಅಂದ್ಲು. ಅವಳ ನಿರ್ವಾಹವಿಲ್ಲದ ಒಂದು ಬಿಲ್ಲಿ ಕೋತಂಬ್ರಿ ಒಂದು ಬಿಲ್ಲಿ ಕರಬೇವು ಕೊಟ್ಲು. ಹಾ! ಬರೋಬರಿ. ಈಗ ಲೆಕ್ಕ ಬರೋಬರಿ ಆತು. ಒಂದು ಬಿಲ್ಲೀ ಮೂಲಂಗೀ(ಕೈ ಬೆರಳು ಎಣಿಸುತ್ತ) ಎರಡು ಬಿಲ್ಲೀ ಪೇರವೀ ಸೊಪ್ಪು, ಮೂರು ಬಿಲ್ಲಿ ಆತು. ಒಂದು ಬಿಲ್ಲಿ ಕರಬೇವು ಒಂದು ಬಿಲ್ಲಿ ಕೋತಂಬರಿ, ಐದು ಬಿಲ್ಲಿ. ಮತ್ತೇನಪಾ (ವಿಚಾರಿಸಿ) ಹಾ! ಒಂದು ಬಿಲ್ಲಿ ಮೆಣಸಿನಕಾಯಿ, ಆರು ಬಿಲ್ಲಿ ಆತ್ss. ಕಿಸೇದಾಗೀನ ಬಿಲ್ಲಿ ಅಂತೂ ಏಳು ಬಿಲ್ಲಿ ಆತು. (ಹೋಗಹತ್ತುವನು. ದಾರಿಯಲ್ಲಿ ರಾಯನ ಹಳೇ ಗೆಳೆಯ ಭೀಮಣ್ಣನು ಭೆಟ್ಟಿಯಾಗುವನು)

ಭೀಮಣ್ಣ:- ಓಹೋ. ನಮಸ್ಕಾರ, ನಮಸ್ಕಾರ. ಏನ ರಾಮಣ್ಣಾ, ಬಾಳ ದಿವಸಕ್ಕ ಭೆಟ್ಟಿ !

ರಾಮರಾಯ:— ನಮಸ್ಕಾರ, ನಮಸ್ಕಾರ. ಏನ ಭೀಮಣ್ಣಾ ನೀನ ಅಪರೂಪಾಗೀದಿ? ಎಲ್ಲಿ ಇದ್ದಿ? ಏನಕಾಸ? ಏನ ಎತ್ಲಾಗ ಹೊಂಟೀ ಈಗ?

ಭೀಮಣ್ಣ:— ಎತ್ಲಾಗ ಹೊಂಡೋವೇನು ರಾಮಣ್ಣಾ, ಸ್ವಲ್ಪ ಕೆಲಸಿತ್ತು ನಿನ್ನ ಪತ್ರss ಬರಬೇಕು ಅಂತಾ ಬಾಳ ದಿವಸದಿಂದ ವಿಚಾರ ಮಾಡಿದ್ದೆ. ಆದರ ಕೆಲಸದಾಗ ಸೂಟೀ ಇಲ್ಲ. ಈಗ ನಿನ್ನ ನೋಡಿ ಬಂದೆ. ಏನಪಾ ನಿನ್ನಂಗ ಸಾವಕಾರನ ನಾನು? ಇಬ್ಬರೂ ಹಳೇ ಗೆಳೇರು. ಕೂಡಿ ಆಡಿದವರು. ನಿನ್ನ ನಸೀಬ ನೋಡಿದರ ನೀ ದೈವಾನಪಾ. ಮನ್ಯಾಗ ದುಡ್ಡು-ಮುಗಾಣಿ, ಬೆಳ್ಳಿ-ಬಂಗಾರ, ದವಸ-ಧಾನ್ಯ. ನನ್ನ ಮನ್ಯಾಗೇನೋ ಮಾರಾಯಾ ಮನೀ ತುಂಬಾ ಮಕ್ಕಳು. ಆರು ಗಂಡು ಐದು ಹೆಣ್ಣು. ನಾ ದುಡುದ್ದು ಹೊಟ್ಟೆಗೇ ಸಾಲೋಂಗಿಲ್ಲ.

ರಾಮರಾಯ:— ಈಗ ನೀ ಕೆಲಸಾ ಏನ ಮಾಡ್ತೀ?

ಭೀಮಣ್ಣ:— ಮ್ಯಾಟ್ರಿಕ್ ನಾವೂ ನೀನೂ ಕೂಡೇ ಪಾಸಾದ್ವಿ. ಆಮೇಲ್ನ ನಿನಗ ಗೊತ್ತss ಅದ ಅಲ್ಲಾ.

ರಾಮರಾಯ:— ಹೌದ, ಹೌದ.

ಭೀಮಣ್ಣ:— ಮುಂದ ನೋಡಪಾ, ನಾ ಹಂಗss ಮೈಸೂರು ಸೀಮಿಗೆ ಹೋದೆ. ಅಲ್ಲೇ ಇಲ್ಲೇ ಚೂರು ಚೂರು ನೌಕರೀ ಮಾಡಿದೆ. ಹಂಗss ಅಲ್ಲೇ ಮದಿವಾತು, ಮುಂದ ಮಕ್ಕಳೂ ಮರಿ ಬಾಳ ಆಗಿ ಹೊಟ್ಟಿ ತುಂಬಲಿಲ್ಲಾ. ಮತ್ತ ಇತ್ಲಾಗ ನಮ್ಮ ಸೀಮಿಗೆ ಬರೋಣ ಅಂತ ಬಂದೆ. ಬಂದ ನಾಲ್ಕು ತಿಂಗಳಾತು. ಇಲ್ಲೇ ದಯಾಬಾಯಿ ಬೀಡಿಫ್ಯಾಕ್ಟರಿಯೊಳಗ ಲೆಕ್ಕಾ ಬರಕೊಳ್ಳಲಿಕ್ಕೆ ಇದ್ದೇನಿ. ಮತ್ತೇನಪಾ ನೀ ಬಡ್ಡೀ ವ್ಯವಹಾರ ಮಾಡ್ತೀಯಂತಾ ಕೇಳಿದ್ದೆ. ಹ್ಯಾಂಗ ನಡೆದದ ವ್ಯವಹಾರ?.

ರಾಮರಾಯ:— ಬಡ್ಡೀ ವ್ಯವಹಾರ ಅನ್ನೂ ಬಾಳ ಕಠಿಣ ಆಗೇದೇನಪಾ. ಸರಕಾರದವರೂ ಬಾಳ ಬಾಳ ಕಾಯ್ದೇ ಮಾಡ್ಯಾರ. ಸಾವಕಾರ ಸರಕಾರದಿಂದ ಲಾಯಸೆನ್ಸ ತಗೋಬೇಕು. ಫೀ ತುಂಬಬೇಕು. ಕಠಿಣಪಾ ಎಲ್ಲಾ.

ಭೀಮಣ್ಣ:— ಮತ್ತ ನೀ ಹ್ಯಾಂಗ ನಡಿಸೀದಿ?.

ರಾಮರಾಯ:— (ಮೆಲ್ಲಗೆ ಭೀಮಣ್ಣನ ಕಿವಿಯಲ್ಲಿ) ಹಂಗs ನಡಿಸೇನಪಾ. ಸಾಮಾನ ವತ್ತೀ ಇಟಗೋಳುದು. ರೂಪಾಯಕ ಪಾವಲೀ ಬಡ್ಡೀ ಕರಾರು ಮಾಡೋದು. ಯಾರಿಗೂ ಹೇಳಬ್ಯಾಡಪಾ ಮಾರಾಯಾ. ನೀ ಗೆಳಿಯಾ ಅಂತss ಹೇಳ್ತೇನಿ. ಮತ್ತೇನು ನಿಂದ ಎಲ್ಲಾ ಆರಾಮss?.

ಭೀಮಣ್ಣ:— ಏನ ಆರಾಮಪಾ, ಇದ್ದದ್ದ ಆರಾಮಪಾ. ನಿನ್ನ ಹತ್ರ ಬರಬೇಕು, ಬರಬೇಕೂ ಅಂತಾ ಬಾಳ ವಿಚಾರ ಮಾಡಿದ್ದೆ. ಒಂದು ಜರೂರ ಕೆಲಸ ಇತ್ತಪಾ.

**ರಾಮರಾಯ:**— (ಯೋಚಿಸಿ ತನ್ನಷ್ಟಕ್ಕೆ) ಓಹೋ ಇವನ ಕೆಲಸ ತಿಳಿದಾಂಗಾತು. ಬಹುತ್ತೇಕ ದುಡ್ಡಿನ ಕೆಲಸ ಇರಬೇಕು. ಒಳ್ಳೇದು ನೋಡೋಣ ಮುಂದ ದೇವರೇನು ಬುದ್ಧಿ ಕೊಡ್ತಾನ. (ಬಹಿರಂಗವಾಗಿ) ಏನ ಭೀಮಣ್ಣಾ, ಏನದು ಕೆಲಸಾ?

**ಭೀಮಣ್ಣ:**— ಕೆಲಸ ಎನಪಾ, ಮಹತ್ವದ ಕೆಲಸೇನಪಾ, ನಿಮ್ಮಂಥ ಗೆಳೆಯರನ ಬಿಟ್ರೆ ನಡೀತದ ಹ್ಯಾಂಗ. (ಅತ್ತಿತ್ತ ನೋಡಿ) ಹೊಂ, ರಾಮಣ್ಣಾ, ಬಾ, ಇಲ್ಲೇ, 'ವಸಂತ ವಿಹಾರ'ದಾಗ ಸ್ವಲ್ಪ ಚಹಾ ತಗೊಂಡು ಬರೋಣ.

**ರಾಮರಾಯ:**— ಛೇ, ಛೇ, ನಾ ಚಹ ಬಿಟ್ಟು ೧೦-೧೫ ವರ್ಷ ಆತು. ಎರಡನೇ ಮಹಾಯುದ್ಧ ಸುರುವಾತು, ನಾ ಇತ್ಲಾಗ ಚಹಾ ಬಿಟ್ಟೆ.

**ಭೀಮಣ್ಣ:**— ಯಾಕ, ಯುದ್ಧ ಮುಗೀತನಕ ಚಹ ಕುಡೀಬಾರದು ಅಂತಾ ಪ್ರತಿಜ್ಞಾ ಮಾಡಿದ್ದೀ? ಈಗೇನು ಯುದ್ಧ ಮುಗಿದು ಎಂಟು ವರ್ಷಾತು, ಮತ್ಯಾಕ?

**ರಾಮರಾಯ:**— ಹಾಂಗೇನೂ ಇಲ್ಲ. ಪ್ಯಾಟ್ಯಾಗ ನೋಡು ಸಾಮಾನ ಧಾರಣಿ ಜೋಳು ಏರಿದಾಂಗ ಏರಿಬಿಟ್ಟವು. ಒಂದು ಸಾಮಾನು ಸಿಕ್ರ ಮತ್ತೊಂದ ಸಿಗತಿದ್ದಿಲ್ಲ.

**ಭೀಮಣ್ಣ:**— ಈಗೇನು ಬೇಕಾದಷ್ಟು ಸಿಗತದಲ್ಲ.

**ರಾಮರಾಯ:**— ಏನ ಸಿಗತದಽಽ ಸಿಗತದ ಖರೇ, ಆದ್ರ ಧಾರಣೀ ಇಕಾನೋಡು (ತನ್ನ ಪಲ್ಲೇದ ಚೀಲಾ ತೋರಿಸಿ) ಈ ಸೊಟ್ಟ ಮೂಲಂಗಿಗೆ ೧ ಬಿಲ್ಲಿ. ಈ ಹರವೀ ಸೊಪ್ಪಿಗೆ ಎರಡು ಬಿಲ್ಲಿ, ಹಿಂಗಾದರ ಹ್ಯಾಂಗೋ.

**ಭೀಮಣ್ಣ:**— ಇರ್ಲಿ ಬಾರೋ ಮಾರಾಯಾ, ಸ್ವಲ್ಪ ಚಹಾ ಹಾಕೋಣು. ಬಾಳ ದಿವ್ಸ ಆದವು ನೋಡು. ನಾನೂ, ನೀನೂ ಕಲೀಬೇಕಾದರ ಧಾರವಾಡದಾಗಽಽ ಕೂಡಿ ಚಹ ಕುಡಿದದ್ದು. ನೆನಪದಽಽ ಏನು? ಮಿತ್ರ ಸಮಾಜದಾಗ ಕುಡಿದದ್ದೂ.

ರಾಮರಾಯ:— (ನಗುತ್ತ) ಓಹೋ ಅದೆSSS ೧೦ ರೂ. ಬಿಲ್ಲು ಮಾಡಿ ಗದ್ದಲವಾಗ ಹಂಗSS ಬಂದಿದ್ದೆಲ್ಲಾ,

ಭೀಮಣ್ಣ:— ಹಾರಿ ಹಾ, ಇನ್ನೂ ನೆನಪಿಟ್ಟೀಯೇಳ. ಹೂಂ, ನಡೀ ಚಹಾಕ. ನಾ ರೊಕ್ಕಾ ಕೊಡ್ತೇನೋ ಮಾರಾಯಾ.

ರಾಮರಾಯ:— ಛೆ, ಇವತ್ತ ಏಕಾದಸಿ ಏನಪಾ. ನೀರಕಾಳ ಸಹಿತ ಹಾಕೋಂಗಿಲ್ಲ. ಮ್ಯಾಲ ಚಹ ಕುಡಿಂಗಿಲ್ಲ. ಚಹದ ಅಂಗಡಿಗಂತೂ ಮೊದಲSS ಹೋಗಂಗಿಲ್ಲ.

ಭೀಮಣ್ಣ:— ಚಹ ಹೋಗಲಿ ಬಿಡಪಾ. ನನ್ನ ಕೆಲಸಾ ಇಷ್ಟು ಮಾಡಿಕೊಡಲಾ.

ರಾಮರಾಯ:— ಏನದು ಹೇಳಲಾ. ಸಾಧ್ಯ ಆದರ ಮಾಡ್ತೇನಿ. ಇಲ್ಲಿದ್ರ ನನ್ನ ಕಡೀಂದಾ ಆಗೋದಿಲ್ಲಾ ಅಂತ ಹೇಳ್ತೇನಿ.

ಭೀಮಣ್ಣ:— (ಅನುನಯಿಸಿ) ನೋಡಪಾ, ರಾಮಣ್ಣಾ, ಹಿರೇ ಮಗಳು ಮದಿವ್ಗೆ ಬಂದಾಳ, ವರಾ ಗೊತ್ತು ಮಾಡೇನಿ. ಇನ್ನು ತಿಂಗಳೊಪ್ಪ ತ್ತ್ಯಾಗ ಮೂರ್ತಾ ಠರಾಯಿಸಿ ಲಗ್ನಾ ಮಾಡಿಬಿಡಬೇಕಂತೇನಿ. ಆದರSS ದುಡ್ಡಿನ ಪ್ರಶ್ನ್ಯಾ ಬಂದದ. ಏನಾರ ಐದಾರು ನೂರು ರೂಪಾಯಿ ವ್ಯವಸ್ಥಾ ಮಾಡತಿಯೇನು? ಮಾಡಿದರ ಬಹಳ ಚಲೋ ಆಗತದ ಏನಪಾ.

ರಾಮರಾಯ:— ಛೇ, ಛೇ, ಏನ ಕೆಲಸಾ ಕೆಡಿಸಿದೋ ಭೀಮಣ್ಣಾ. ನಿನ್ನೆ ಹೇಳ್ಬಾರದಾಗಿತ್ತSS ಒಂದ ಸಾವಿರ ರೂಪಾಯಿ ಇದ್ದು. ಇವತ್ತ ಮುಂಜಾನೆ ಆ ಗೌಡ್ರ ಬಸನಗೌಡ ೧೦ ತೊಲೀ ಬಂಗಾರ ಒತ್ತೀ ಇಟ್ಟು ರೂಪಾಯಿಗೆ ೪ ಆಣೇ ಬಡ್ಡೀ ಕರಾರ ಮಾಡಿಕೊಂಡ ಹೋಗ್ಯಾನೇನಪಾ. ಅವನ ರೂಪಾಯಿ ಬರ್ಲೀ ಏನಪಾ. ಆ ಮ್ಯಾಲ ಬೇಕಾದರ ನೀ ತಗೊಂಡ ಹೋಗು. ಮತ್ತ ನಿನ್ನ ಪ್ಯಾಟ್ಯಾಗಿನ ಮನಿ ಏನಾತು. ಯಾರಿಗಾರ ಬಾಡಗೀ ಕೊಟ್ಟೇಯೇನ?

ಭೀಮಣ್ಣ:— ಮಾರಾಯಾ ನಾ ಮೈಸೂರಿಗೆಹೋಗೂ ಮುಂದ ಆ ಮನಿ ಮಾರಿಕೊಂಡು ಹೋಗೇನಿ ಇನ್ನೆಲ್ಲಿ ಮನಿ. ಆ ಮನಿ ಇದ್ರ ಇವತ್ತss ಮಾರಿ ರೂಪಾಯಿ ತರ್‍ತಿದ್ದೆ. ನಿನ್ನರss ಯಾಕ ಕೇಳ್ತಿದ್ದೆ.

ರಾಮರಾಯ:— ಹಿಂಗೇನ?

ಭೀಮಣ್ಣ:— ಹಿಂಗಾಗೇದೇನಪಾ. ಏನೋ ನನ್ನ ಕೈ ನಿಂತ ದೇನಪಾ. ಏನೋ ಸಹಾಯ ಮಾಡಿದರ ನೋಡಪಾ ನಿನ್ನ ನೆನಸ್ತೇನಿ.

ರಾಮರಾಯ:—ಛೇ, ಛೇ ಭೀಮಣ್ಣ ದೇವರಾಣಿ ಮಾಡಿ ಹೇಳ್ತೇನಿ (ಕಿಸೇದೊಳಗಿನ ಬಿಲ್ಲಿ ಹೊರಗ ತೆಗೆದು) ಈ ಬಿಲ್ಲೀ ಸಿವಾಯ ಈಗ ಸಧ್ಯ ನನ್ನ ಹತ್ರ ಏನು ಇಲ್ಲಪಾ. ಇಲ್ದಿದ್ರೇನೋ ನಿನ್ನ ಕಡಿಂದಾ ಒಂದು ಬಿಲ್ಲೀ ಬಡ್ಡೀ ತಗೊಳ್ತಿದ್ದಿಲ್ಲೇನಪಾ. ಎಂಥಾ ಪೇಶ್ಯಾದಾಗ ಕೇಳ್ದಿ. ಛೇ, ಛೇ ಕೆಲಸಾ ಕೆಡಿಸಿದಿ ನೋಡು

ಭೀಮಣ್ಣ:— ಹ್ಯಾಂಗರ ಮಾಡೋ ಮಾರಾಯಾ.

ರಾಮರಾಯ:— ಹ್ಯಾಂಗ ಮಾಡೋದು ಭೀಮಣ್ಣ. ನನ್ನೂ ಸಂಸಾರ ಬಾಳ ಜಡಾ ಆಗೇದೇನಪಾ. ಏನ ಹೇಳಬೇಕು. (ರಾಮರಾಯನ ಮಗ ಬಾಬೂ ಪ್ರವೇಶಿಸುವನು. ಅವನನ್ನು ನೋಡಿ) ಇಕಾ ನನ್ನ ಮಗನ್ನ ನೋಡಿಲ್ಲೇನು ನೀನು. ಏ ಬಾಬೂ, ಬಾ ಇಲ್ಲಿ ಎಲ್ಲಿಗೆ ಹೋಗ್ಗಿ? ಸಾಲೀ ಬಿಟ್ಟು ಯಾಕ ಬಂದೀ?.

ಬಾಬು:— ನಾಲ್ಕ ತಿಂಗಳ ಫೀ ಕೊಟ್ಟಿಲ್ಲ. ಅದಕ ನನ್ನ ಹೊರಗ ಹಾಕ್ಯಾರ. ಫೀ ತಂದ್ರ ಸಾಲಿಗೆ ಬರಬೇಕು. ಇಲ್ದಿದ್ರ ಇಲ್ಲಾ ಅಂತಾ ನಮ್ಮ ಸರ್ ಹೇಳ್ಯಾರ. ಅದಕ ನಿನ್ನಹುಡುಕುತಾ ಹೊಂಟಿದ್ದೆ.

ರಾಮರಾಯ:–ನೋಡಪಾ ಭೀಮಣ್ಣಾ. ನಮ್ಮ ಉರ್ಲು. ನನ್ನದೂ ಪರಿಸ್ಥಿತಿ ಬಾಳ ಕೆಟ್ಟಹೋಗೇದ. ಇವ ಒಬ್ಬನss ಮಗ ಏನಪಾ. ಇವ ನಿಗೂ ಕೂಡಾ ತಿಂಗಳಾ ತಿಂಗಳಾ ಫೀ ಕೊಡೋದು ಇಷ್ಟು ಕಠಿಣಾಗೇದ.

ಆಗಲಿ ಒಂದಷ್ಟು ಬರೀನಿ. ದೇವರ ದಯಾ ಇರ್ಲಿ. ಬರ್ತೀನಿ, ನಮಸ್ಕಾರ. ಸ್ಯಾಲೀss ಮಸ್ತ್ರಾಲಿ ಫಿಷ್ಟ್ಯಾದಾಗಿರು. ಅಂ! ನಮಸ್ಕಾರ.

(ಭೀಮರಾಯ ಹೋಗುವನು. ತಂದೀ-ಮಗನೂ ಮುಂದೆ ಮಾತಾಡುವರು)

ರಾಮರಾಯ:— ಅಲ್ಲೋ, ಇವತ್ತು ಏಕಾದಸಿ ಅದ ಅಂತಾ ಹೇಳಬೇಕು

ಬಾಬು:— ನಮ್ಮ ಹಾಯಸ್ಕೂಲಿನಾಗ ಏಕಾದಸೀ ಮಾಡೋದಿಲ್ಲಪಾ. ಯಾವಾಗಲೂ ದ್ವಾದಸೀನ ಮಾಡ್ತಾರ.

ರಾಮರಾಯ:— ಅಲ್ಲೋ ಫ್ರೀ ಸಿಪ್, ಹಾಫ್‌ಫ್ರೀಸಿಪ್ಪು ಇಂತಾವಕ ಅರ್ಜೀ ಮಾಡಬೇಕಾಗಿತ್ತು.

ಬಾಬು:— ಏನಪಾ ನಾ ಅರ್ಜಿ ಮಾಡಿದರ "ನಿಮ್ಮಪ್ಪಗೇನ ಧಾಡಿ ಆಗೇದ?" ಅಂದಾರು. ನೀ ಬಡ್ಡೀ ವ್ಯವಹಾರ ಮಾಡೋದು ಅವರಿಗೇನು ಗೊತ್ತು ಇಲ್ಲಾ ಅಂತಾ ತಿಳಕೊಂಡೀ? ನೋಡಪಾ ನೀಎಲ್ಲಾ ಫೀ ಕೊಟ್ರ ನಾ ಸಾಲಿಗೆ ಹೋಗತೇನಿ. ಇಲ್ಲಿದ್ರ ಇಲ್ಲಾ.

ರಾಮರಾಯ:— ಹೀಂಗss ಹಂಗರ! ನೀ ಸಾಲಿಗೆ ಹೋಗುದss ಬ್ಯಾಡ. ಏನರ ಕೆಲಸಾ ಮಾಡು. ನಾಲ್ಕು ದುಡ್ಡರ ಸಿಕ್ಕ್ಯಾವು. ನೀ ಏನ ಕಲ್ತು ಮಾನುಲತೀ ಮಾಡುದೂ ಅಷ್ಟರಾಗ ಅದ. ಬಿ. ಎ. ಎಮ್. ಎ. ಪಾಸಾದವರಿಗೇನೆ ನೌಕರೀ ಇಲ್ಲ. ನೀ ಕಲ್ತ ಹಿಂಗ ಹೊಲಮನೀ ಹಿಡಿದು ಕೊಡ್ರ್ಯೋದು. ಇಕಾ ಮುಂಜಾನೆ ದಿನಾ ವರ್ತಮಾನ ಪತ್ರಾ ಮಾರು. ಒಂದಷ್ಟು ಬರಲಿ. ಊರಾಗೇನು ದಿನ ಪತ್ರ ಮುರ್ನಾಕಾಗ್ಯಾವು. ತಿಳೀತ.

ಬಾಬು:— ಏನಪಾ ನೀ ಹಿಂಗ ಅಂದ್ರ, ದುಡ್ಡು ಇಲ್ಲದವರು ಹೇಳಿ ದಂಗ ಹೇಳ್ತಿ. ಬಡ್ಡೀ ವ್ಯವಹಾರ ಮಾಡ್ತೀದಿ. ವಿದ್ಯಾಭ್ಯಾಸಕ್ಕೆ ಖರ್ಚು ಮಾಡೋದಿಲ್ಲಾ ಅಂದ್ರ ಏನಪಾ ಇದು ನಿನ್ನ ಜೀನತನಾ! ನಾ ಅನಕಾ ಸಾಲಿ ಬಿಡೋದಿಲ್ಲ. ನೀ ಫೀ ಕೊಡಲಿಕ್ಕೇ ಬೇಕು.

ರಾಮರಾಯ:— ಯಾಕ, ಸಾಲಿಗಿ ಒಹೆಳ ಉದ್ದ ಆತು. ನೀ ಕೇಳಿದಾಗ ಮತ್ತ ಕೊಡಲಿಕ್ಕೆ ನಿನ್ನ ಅಜ್ಜನ ಮನಿ ಗಂಟು ಇಟ್ಟೆ? ನಡೀ ಹೋಗು, ಲುಚ್ಚ್ಯಾ ನನ್ನ ಮನೀಗೆ ಬರಬ್ಯಾಡ.

ಬಾಬು:— ಹೊನಪ್ರೋ ಮನೀಬಿಟ್ಟು ಹೋಗ್ತೀನಿ. ಅದಷ್ಟು ಖರ್ಚು ಉಳಿದಷ್ಟು ಉಳಿತು.

ರಾಮರಾಯ:— ನಡಿ ಹೋಗ, ನಾಳೆ ಫೀ ಕೊಡ್ತಾನ ನಮ್ಮ ಅಪ್ಪ ಅಂತಾ ಹೇಳ. ಯಾರೇನು ಕೈಯಾಗ ಕಟ್ಟಿಗೊಂಡು ಬಾಳ್ವೆ ಮಾಡ್ತಾರ? ನಾಲ್ಕು ತಿಂಗಳಾನ ತಡದಾರಂತ, ಇನ್ನೊಂದ ತಿಂಗಳಾ. ಮುಂದಿನ ತಿಂಗಳ ಕೊಡತಾನಂತ ಹೇಳ. ನಿನಗೇನ ಬಾಯಿಯಿಲ್ಲಾ?. ಅವರ ಹೋಗಂದ್ರಂತ, ಈ ಮಗಾ ಓಡಿಬಂದಾನ. ಏನ ಅಂಗ್ತೀ ಉದ್ರೀ ಅಂತಾ ತಿಳದಾರೇನು ನಿಮ್ಮ ಮಾಸ್ತರ.

ಬಾಬು:—ಅವರು ಕೇಳುದಿಲ್ಲಪಾ. ಫೀ ತರದಿದ್ದರ ನಿನ್ನರ‍್ಯಾಕರಕೊಂಡ ಬಾ ಅಂತಾ ಹೇಳ್ಯಾರ. ನೀನರ ಬಾರಪಾ, ಸಾಲಿಗೆ ಬಂದು ನಮ್ಮ ಸರ್ ಗೆ ಹೇಳು.

ರಾಮರಾಯ:— ಇವತ್ತ ಏಕಾದಸಿ ಏನಪಾ. ನನಗ ಬಾಳ ತ್ರಾಸ ಆಗೀದ, ಈಗ ಹೊತ್ತೂ ಮುಳುಗಲಿಕ್ಕ ಬಂತು. ನಾಳೆ ಮುಂಜಾನೆ ಬರತನಿ. ಬಂದು ನಾ ಏನ ಹೇಳೂದು ಹೇಳ್ತನಿ. ಈಗ ನೀ ಸಾಲಿಗೆ ಹೋಗು. ನಿನ್ನ ಪುಸ್ತಕ ಯಾರರ ಒಯ್ದಾರು ಸಾಲಿ ಬಿಡುದ್ರಾಗ ಹೋಗಿ ಪುಸ್ತಕ್ತೆಗೊಂಡು ಬಾ. (ಬಾಬೂ ಸಾಲೆಗೆ ಹೋಗುವನು. ರಾಮರಾಯನು ಮನೆಗೆ ಹೋಗುವನು)

## — ದೃಶ್ಯ

[ತೆರೆ ಎದ್ದ ಕೂಡಲೇ ಪ್ರೇಕ್ಷಕರ ಕಣ್ಣಿಗೆ ಬೀಳುವದು ರಾಮರಾಯನ ಪಡಸಾಲೆ. ಗೋಡೆಗಳ ಮೇಲೆ ಅಲ್ಲೊಂದು ಇಲ್ಲೊಂದು ಹಳೇದು ಪೌರಾಣಿಕ ಚಿತ್ರಗಳು ಜೋತುಬಿದ್ದಿವೆ. ಪಡಸಾಲೆಯ ಬಾಗಿಲಎದುರಿನ ಗೋಡೆಯ ಮಧ್ಯಭಾಗದಲ್ಲಿ ಮಹಾತ್ಮಾ ಗಾಂಧೀಜಿಯವರ ಭಾವಪಟವು ಪೂಮಾಲೆಯಿಂದ ವಿರಾಜಮಾನವಾಗಿ ಕಾಣುತ್ತಿದೆ. ಪಡಸಾಲೆಯ ಎಡಬದಿಗೆ ಒಂದು ಮೇಜು. ಅದರಬದಿಗೆ ಎರಡು ಖುರ್ಚಿಗಳಿವೆ. ಮತ್ತೊಂದು ಬದಿಗೆ ಹಾಸಿಗೆ ಸುಳ್ಳಿಗಳು ಒಂದರಮೇಲೊಂದು ಏರಿ ನಿಂತಿವೆ. ಮೇಲೆ ಗೂಟಗಳಿಗೆ ಕೈಚೀಲಗಳು ತೂಗಹಾಕಿವೆ. ಮನೆಯ ಆಳು-ಮಲ್ಲನು ಭಾವಪಟಗಳ ಮೇಲಿನ ಧೂಳು ಜಾಡಿಸುತ್ತಿರುವಾಗ್ಗೆ ಜಾನಕೀಬಾಯಿಯು ಪ್ರವೇಶಿಸಿ)

ಜಾನಕೀಬಾಯಿ:— ಮಲ್ಲಾss, ಏ ಮಲ್ಲಾ, ಲಗೂನ ಕಂದೀಲ ಪಾವ ಪರಿಸಿ ದೀಪಾಹಚ್ಚು. ಹೊತ್ತು ಮುಳಗತಾ ಬಂತು. ಈಗ ಅವರೂ ಪ್ಯಾಟಾಗಿಂನ ಬರು ಹೊತ್ತಾಗೇದ.

ಮಲ್ಲ:— ಯಾಕ್ರಿ ಎವ್ವಾ, ಇವತ್ಯಾಕ ಈಟ ಗಡಿಬಿಡಿ?

ಜಾನಕೀಬಾಯಿ:— ಇವತ್ತ ಏಕಾದಸಿ ಅದ. ಈಶ್ವರ ದೇವರ ಗುಡ್ಯಾಗ ಯಾರೋ ಶಾಸ್ತ್ರಿಗಳು ಕೀರ್ತನಾ ಹೇಳತಾರಂತ. ನಾನೂ ಹೋಗಬೇಕಂತಾ ಮಾಡೇನಿ. ಅದಕ ಲಗೂನ ದೀಪಾಹಚ್ಚು.

ಮಲ್ಲ:— ಹೂನ್ರೀ ಯವ್ವಾ.

(ಜಾನಕೀಬಾಯಿ ಒಳಗೆ ಹೋಗುವಳು. ಮಲ್ಲನು ಕಂದೀಲ ತಂದು ವರಿಸುತ್ತ)

ಮಲ್ಲ:— ಅವ್ವಾಅವರ. ಕಡ್ಡೀಪೆಟಿಗಿ ಕೊಡ್ರಿ, ದೀಪಾಹಚ್ಚತನಿ.

(ಜಾನಕೀಬಾಯಿಯು ಒಳಗಿನಿಂದ ಕಡ್ಡೀಪೆಟ್ಟಿಗೆ ಒಗೆಯುವದಕ್ಕೂ ರಾಮರಾಯನು ಕೈಚೀಲ ಹಿಡಿದು ಒಳಗೆ ಬರುವದಕ್ಕೂ ಸಮವಾಗಿ ಕಡ್ಡೀಪೆಟ್ಟಿಗೆ ಕಾಲಿಗೆ ಬಡಿಯುವದು. ರಾಯನು ಟೊಣ್ಣನೇ ಜಿಗಿದು)

ರಾಮರಾಯ:— (ಆಶ್ಚರ್ಯದಿಂದ) ಎಲಾ ಇದರ, ಕಡ್ಡೀಪೆಟಿಗೇನು! ನಾ ಏನ ಬಡೀತೋ ಅಂತಾ ಮಾಡಿದ್ದೆ. ಮಲ್ಲ್ಯಾ, ಏನು ನಡಿಸಿದಿ?

ಮಲ್ಲ:—ಅವ್ವಾರು ಇಲ್ಲಿಲ್ಲೋ ಕೀರ್ತನಾ ಕೇಳಾಕ ಹೋಕ್ಕಾರಂತ್ರೀ ಅದಕ ಲಗೂನ ದೀಪಾಹಚ್ಚಾಕ ಹೇಳ್ಯಾರ್ರಿ.

ರಾಮರಾಯ:— ಥೂ, ಹುಚ್ಚಮುಂಡೇಗಂಡಾ, ಹೊರಗ ಹೋಗಿ ಒಂದು ತುಸು ಮುಗುಲು ನೋಡಿಬಾ. ಇನ್ನೂ ಕಂಡಾಬಟಿ ಹೊತ್ತ ಅದ. ಈಗಾಗ್ಗೆ ದೀಪಾ ಹಚ್ಚಿ ಯಾರಮನೀ ಎಣ್ಣೀ ಹಾಳಮಾಡಬೇಕಂತೀ. (ತನ್ನಷ್ಟಕ್ಕೆ) ಮೊದಲss ಎಣ್ಣಿ ಕಂಡಾಬಟಿ ಮಬಾರಿ; ಮ್ಯಾಲ ಇವಾ ಹಗಲತ್ನಾಗ ದೀಪಾ ಹಚ್ಚಿ ಎಣ್ಣೀ ಹಾಳಮಾಡಬೇಕೂ ಅಂತಾನ.

(ಮಲ್ಲನು ದೀಪಾಹಚ್ಚಲು ಅನುಮಾನಿಸುವನು)

ಜಾನಕೀಬಾಯಿ:— (ಪ್ರವೇಶಿಸಿ) ಹೊತ್ತೂss ಮುಳುಗೀದ, ನಾನೂ ಕೀರ್ತನಕ ಹೋಗಬೇಕಂತಾ ಮಾಡೇನಿ. ಅದಕ ಇವಗ ದೀಪಾಹಚ್ಚು ಅಂತಾ ಹೇಳಿದೆ. ಇದರೊಳಗ ಅವನದೇನು ತಪ್ಪು?

ರಾಮರಾಯ:— ಹೊತ್ತು ಮುಳುಗಿದರೇನಾತು. ಮುಗಲಾಗೇನ ಚಿಕ್ಕಿ, ಚಂದಪ್ಪಾ ಸತ್ತಾವೇನು? ಇಷ್ಟು ಬೆಳಕು ಸಾಕಾಗೋದಿಲ್ಲ? ನೀವೇನು ಮುತ್ತು ಪೋಣಿಸಬೇಕಾಗೇದ? (ಮಲ್ಲನಿಗೆ) ಇಕಾ. ಮಲ್ಲ್ಯಾ, ನೋಡು, ಇನ್ನಮ್ಯಾಲ ದೀಪಾಹಚ್ಚಬೇಕಾದರ ನೆರಿ ಹೊರಿ ನಾಕ ಮಂದೀಕೇಳಿ ಹೊತ್ತು ಮುಳುಗೀದ ಅಂತss ಅವರು ಹೇಳಿದಮ್ಯಾಲ ಖಾತ್ರಿ ಮಾಡಿಕೊಂಡು ದೀಪಾಹಚ್ಚಬೇಕು. ತಿಳೀತss? ಈಗ ಮೊದಲು ಹೋಗಿ ಬಸನ

ಗೌಡಾ ಹಾವೇನುನಿ ಮತ್ತ ಕುರುಬರ ಹಾಲಪ್ಪಾ ಅವರಕಡಿಂದಾ ರೂಪಾಯಿ ವಸೂಲ ಮಾಡಿಕೊಂಡ ಬಾ. ಹೋಗ ನೊನ್ನ.

ಮಲ್ಲಿ:— ಅವರು ಇಷ್ಟತ್ತ್ಯಾಗ ಮನ್ಯಾಗ ಇರ್ತಾರ ಇದ್ರೀ?

ರಾಮರಾಯ:— ಮೊದಲ ಅವರ ಮನಿಗ್ಯಾರ ಹೋಗೋ. ಇಲ್ಲೀ ಕುತಗೊಂಡ ಗೊಡ್ಡ ಆಕಲ ಹಾಕ್ತೀ ಅಲ್ಲಾ. (ಮಲ್ಲಿನು ಹೋಗುವನು. ರಾಮರಾಯನು ರುಮಾಲು, ಕೋಟು, ಜಾಳೀಗೆಗಳನ್ನು ತೆಗೆಯಹತ್ತುವನು. ಜಾನಕೀಬಾಯಿಯು ಪಲ್ಲೀದ ಚೀಲಾ ತೆಗೆದುಕೊಂಡು ಒಳಗೆ ಹೋಗುವಳು. ಓಣಿಯಲ್ಲಿ 'ಸಂಯುಕ್ತ ಕರ್ನಾಟಕ, ನವಯುಗ, ವಿಶಾಲಕರ್ನಾಟಕ, ತರುಣ ಕರ್ನಾಟದ, ನೇತಾಜಿ, ಪ್ರಭಾರಿ' ಅಂತಾ ವರ್ತಮಾನಪತ್ರ ಮಾರುವವನ ಧ್ವನಿಯಾಗುವದು.)

ರಾಮರಾಯ:— (ಹೊರಗೆ ಬಂದು) ಏ ತಮ್ಮಾ ಬಾರೋ ಇಲ್ಲಿ.

ಹುಡುಗ:— ಯಾವ ಪೇಪರ ಬೇಕ್ರೀ?

ರಾಮರಾಯ:— (ಕೈಯಲ್ಲಿ ಒಂದು ಪತ್ರದ ನಂತರ ಮತ್ತೊಂದನ್ನು ತಕ್ಕೊಂಡು ಓದುತ್ತಾ) ನೀ, ಯಾರ ಮಗನೋ ?

ಹುಡುಗ:— ಎಲಾ ಇವರss! ಹಂಗss ಓದಾಕ ಹತ್ತಿದ್ರಲ್ರೀ! ಮೊದಲ ರೊಕ್ಕಾ ಕೊಡ್ರೀ. ನಮ್ಮಪ್ಪಾ, ಅವ್ವನ್ನ ತಗೊಂಡ ಏನ ಮಾಡೋದೈತಿ.

ರಾಮರಾಯ:— ( ಓದುತ್ತಲೇ ) ನೀ, ಆ ಉಣಕಲ್ಲ ಬಸಪ್ಪನ ಮಗಾ ಅಲ್ಲ? ಎಷ್ಟು ದೊಡ್ಡವ ಆಗೀ ಅಲ್ಲೋ ?

ಹುಡುಗ:— ರಾಯ್ರss ಪೇಪರ ಬೇಕಾದ್ರ ರೊಕ್ಕಾ ಕೊಡ್ರಿ ಇಲ್ಲಿದ್ರ ಬಿಡ್ರಿ. ಫುಕ್ಕಟ ಪತ್ರಾ ಓದೋ ಮಂದಿ ಬಾಳ ಆಗೇತಿ. ನಿಮ್ಮಂಥವರ ಇದ್ರ ನಮ್ಮಂಥವರು ಹೊಟ್ಟೆಗೆ ಕೇರು ಹಾಕ್ಕೊಳ್ಳಬೇಕಾದೀತ್ರಿ.

ರಾಮರಾಯ:— (ಪೇಪರ ತಿರುಗಿ ಕೊಟ್ಟು) ಇವತ್ತ ಏಕಾದಶಿ ಅದನೋ. ರೊಕ್ಕಾಗಿಕ್ಕಾ ಹೊರಗ ಕೊಡಂಗಿಲ್ಲ.

ಹುಡುಗ:— ವರ್ತಮಾನ ಪತ್ರಕ್ಕೂ, ಏಕಾದಶಿಗೂ ಏನ ಸಂಬಂಧ್ರಿ. ಶರಣ. ಹೋಗಿ ಬರ್ತೇನ್ರಿ. (ತನ್ನಷ್ಟಕ್ಕ) ದುಡ್ಡು ಕೊಟ್ಟು ಓದೋದಂದ್ರs ಜೀವಸುತ್ತ ಬರ್ತೈತಿ. (ಹೋಗುವನು)

ಜಾನಕೀಬಾಯಿ:— ಇನ್ನ್ಯಾರ ದೀಪಾ ಹಚ್ಲೀ?

ರಾಮರಾಯ:— ಓಹೋ ಅಲಬತ್ತ ಹಚ್ಚು. ಈಗss ಹೊತ್ತು ಮುಳಗಿದಂಗಾತು.

ಜಾನಕೀಬಾಯಿ:— (ದೀಪಾಹಚ್ಚಿ ನಮಸ್ಕರಿಸುವಳು. ರಾಯನೂ ನಮಸ್ಕರಿಸುವನು) ಕೀರ್ತನಕ ಹೋಗಬೇಕಂತ ಮಾಡೇನಿ ಮತ್ತsss....

ರಾಮರಾಯ:— ಅಂss.... ಏನಂದಿ?

ಜಾನಕೀಬಾಯಿ:— ಕೀರ್ತನಕ ಹೋಗಬೇಕಂತಾ ಮಾಡೇನಿ.

ರಾಮರಾಯ:— ಹೋಗಲ್ಲಾ ಯಾರ ಬ್ಯಾಡ ಅಂತಾರ.

ಜಾನಕೀಬಾಯಿ:— ಮತ್ತss ಆರತಿಯೊಳಗ ಹಾಕಲಿಕ್ಕೆ ಎರಡು ಬಿಲ್ಲಿ ಬ್ಯಾಡ?

ರಾಮರಾಯ:— ಏನೂ, ಎರಡು ಬಿಲ್ಲೀ! ಆ ಕೀರ್ತನಕಾರ ತನ್ನ ಕೀರ್ತನಕ ತಿಕೀಟ ಇಟ್ಟ್ಯಾನೇನು? ದುಡ್ಡು ಗಿಡ್ಡು ಕೇಳೋದಾದರ ನೀ ಕೀರ್ತನಕ ಹೋಗೋದss ಗರ್ಜ ಇಲ್ಲಾ. ತಿಳೀತ?

ಜಾನಕಿಬಾಯಿ:— ಇವತ್ತ ಏಕಾದಶಿ ಆಗೇದ. ಕೀರ್ತನಾ ಕೇಳಿದರ ಪುಣ್ಯಾ ಬರತದಂತ, ಇದಲ್ಲದ ನನಗೂ ಮನ್ಯಾಗ ಕೆಲ್ಸಾ ಮಾಡೀ ಮಾಡೀ ಬ್ಯಾಸರನೂ ಬಂದದ. ಅದಕ ಒಂದು ತುಸು ಹೋಗಬೇಕಂತ ಮಾಡೇನಿ.

ರಾಮರಾಯ:—ಹೋಗತಿದ್ರ ಸುಮ್ಮನ ಹೋಗು. ದುಡ್ಡಾಗಿದ್ರ ಕೇಳಿದ್ರ ನನ್ನಿಂದ ಬಂತೂ ಅಂದಿ. ಇಲ್ಲಿ ನೋಡು ಮುಂಜಾನಿಂದ ಸಂಜೀ ತನಕ ಓಡಾಡಿದರ ಒಂದ ದಂಬಡೀ ಸಾಲ ವಸೂಲಾಗಿಲ್ಲ. ಕೊಟ್ಟಸಾಲ ಮುಳುಗೋ ಹೊತ್ತ ಬಂದದ. ಮತ್ತ ಮ್ಯಾಲ ಇದ್ದದ್ದ ನೀ ಖರ್ಚ ಮಾಡಬೇಕು ಅಂದ್ರ ಏನಿದು?

ಜಾನಕೀಬಾಯಿ:–ನಿಮಗರ ನಾ ಏನ ಹೆಚ್ಚಿಗೀ ಕೇಳೇನಿ? ಎರಡು ಬಿಲ್ಲಿ.

ರಾಮರಾಯ–ಊಂs ಊಂss. ನನ್ನ ಉಸಾಬರಿ ತರಗೀಬ್ಯಾಡ ನೋಡ.

( ಕಂದೀಲು ಒಮ್ಮೆಲೇ 'ಪಕ್' ಎಂದು ಆರಿಹೋಗುವದು)

ಜಾನಕೀಬಾಯಿ:— ಚಲೋ ಅಪಶಕುನಾ. ಇನ್ನೇನ ನನಗ ಬಿಲ್ಲಿ ಸಿಗ್ತದss. ನಾ ಏನ ಕೀರ್ತನಕ ಹೋಗತೇನಿ? (ಮತ್ತೆ ಕಡ್ಡಿ ಕೆರಿದು ದೀಪ ಹಚ್ಚಲು ಪ್ರಾರಂಭಿಸುವಳು)

ರಾಮರಾಯ:— ಹೂಂ, ಒಂದss ಕಡ್ಡ್ಯಾಗ ಹಚ್ಚ. ಕಡ್ಡೀನು ಬಾಳ ದುಬಾರಿ ಆಗ್ಯಾವ.

(ಜಾನಕೀಬಾಯಿ ದೀಪಾ ಹಚ್ಚುವಳು. ರಾಮರಾಯನು ಅವಳ ಮುಖವನ್ನು ನೋಡಿ)

ರಾಮರಾಯ:— (ಕೈ ಮುಂದೆಮಾಡಿ ಅವಳ ಹಣೀ ತೋರಿಸುತ್ತ) ಏನದೂ, ಹಣೀಮ್ಯಾಲssss? ಅಬಬss! ಎಷ್ಟು ಗಡುತರಾ ಕುಂಕುಮಾ ಹಚ್ಚೀದಿ! ಏನತಾನ! ನಾ ಎಲ್ಲೋ ಬಿದ್ದ ಹಣೀ ಒಡಕೊಂಡಾಳೇನೋ ಅಂತಾ ತಿಳಿದಿದ್ದೆ. ಹೀಂಗ ಕುಂಕುಮಾ ಹಚ್ಚಿದರಹ್ಯಾಂಗ ಈಡಾಗ ಬೇಕು! ಕೆಮ್ಮಣ್ಣ ಸಹಿತ ಸಾಲಲಿಕ್ಕಿಲ್ಲ ಕೆಮ್ಮಣ್ಣು.

ಜಾನಕೀಬಾಯಿ:— ಥೂ, ಥೂ, ನಿಮ್ಮ ಜೀನತನದ ಕಾಲಾಗ ಸಾಕಾಗಿ ಹೋಗೇದ. ಹಣೀಮ್ಯಾಲಿನ ಕುಂಕುಮ ಸಹಿತ ಬಾಳ ಆತss ನಿಮಗ! ಮುತ್ತೈದೇರ ಹಣೀಮ್ಯಾಲ ಥಾಳಾಗಿ ಕುಂಕುಮ ಇರಬೇಕು.

ರಾಮರಾಯ:— ಅಂಹssss ದುರ್ಗಾದೇವತಿ ಆಗೀಅಲ್ಲಾ! ಅದ ಕೇನು ಅಳತಿ ಅದಸ್ಸss ಇಲ್ಲ? ಸಾಲಿಗೆ ಹೋಗೋ ಹೆಣ್ಣು ಹುಡುಗರನ ನೋಡು. ಎಷ್ಟುಸಾಟಿ ಕುಂಕುಮಾ ಹಚ್ಚಿರ್ತಾರ. ಹಂಗ ಹಚ್ಚಿದರ ಕುಂಕು ಮಾನೂ ಉಳಿತದ. ಮಾರೀನೂ ಚಂದ ಕಾಣಸ್ತದ. ಹೀಂಗ ಹಚ್ಚಿದರ ಏನಮು ಅಂತೀನಿ?

ಜಾನಕೀಬಾಯಿ:— ಮಂದೀ ನೋಡಿ ಮಾಡಬೇಕಾದರ, ಎಲ್ಲಾ ಕೆಲಸಾನೂ ಮಂದೀ ನೋಡೇ ಮಾಡಬೇಕಾಗತದ. ಹಂಗರ, ಮಂದೀ ಮನಿ ಹೆಣ್ಣುಮಕ್ಕಳು ದುಡ್ಡು ತಗೊಂಡು ಕೀರ್ತನಕ ಹೊಂಟಾರ. ಅಕಾ, ನೋಡ್ರಿ ಬಾಜೂಮನಿ ರಂಗೂತಾಯಿ, ಗಂಗೂತಾಯಿ ಎಲ್ಲಾರೂ ಮಾತಾಡಿಕೋತ ದುಡ್ಡು ತಗೊಂಡು ಕೀರ್ತನಕ ಹೊಂಟಾರ. ಇದಕ ಮಾತ್ರ ಮಂದೀನೋಡಿ ಮಾಡಬಾರದು.

ರಾಮರಾಯ:— ಅವರು ಓಡೀಹಿಡದು ಹೋಗ್ತಾರ. ಅವರ ಕೈಯ್ಯಾಗಿನ ದುಡ್ಡು ನಿನಗ ಕಾಣಿಸ್ತಲ್ಲss! ನಾ ಹೇಳ್ತನಿ, ದುಡ್ಡೂ, ಗಿಡ್ಡೂ ಕೇಳ್ಬ್ಯಾಡ. ನೀ ಕೇಳ್ದಂಗ ದುಡ್ಡು ಕೊಡಲಿಕ್ಕೆ ನಾ ಏನ ನಿಮ್ಮಪ್ಪನಮನಿ ಗಂಟು ತಿಂದಿಲ್ಲ. ತಿಳೀತ?

(ಒಬ್ಬ ದೇಶಾವರಿ ಬ್ರಾಹ್ಮಣ "ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ...." ಎಂಬ ಶ್ಲೋಕವನ್ನು ಉಚ್ಚರಿಸುತ್ತ ಪ್ರವೇಶಿಸುವನು. ಜಾನಕೀಬಾಯಿಯು ಒಳಗೆ ಹೋಗುವಳು.)

ದೇಶಾವರಿ ಬ್ರಾಹ್ಮಣ:— ನಮಸ್ಕಾರ, ರಾಯರ, ನಮಸ್ಕಾರ. ನಾವು ಗೋಕರ್ಣದ ಬ್ರಾಹ್ಮಣರು. ಬಹಳ ಬಡವರು. ಮಗನ ಮುಂಜೀ ಮಾಡಬೇಕಾಗೇದ. ಏನಾರ ತಾವು ದುಡ್ಡಿನ ಸಹಾಯ ಮಾಡಬೇಕು. ದೇವರು ನಿಮಗ ಕಲ್ಯಾಣ ಮಾಡ್ತಾನ. ಇಕಾ ತಗೊಳ್ರಿ. ಗೋಕರ್ಣ ಮಹಾಬಳೇಶ್ವರ ಪ್ರಸಾದ. (ಕೊಡುವನು)

ರಾಮರಾಯ:— (ತನ್ನಷ್ಟಕ್ಕೆ) ಇವನ ಆಸಾಮಿ ಕೊಡಿತೇನಾ ನನಗ. ಪ್ಯಾಟ್ಯಾಗ ಆ ಫೀವಣ್ಣಾನ ಕಾಟ ತಪ್ಪಿಸಿಕೊಂಡು ಬರೋದ್ರಾಗ ಮನ್ಯಾಗ ಮೇಸ್ತ್ರೀದಾಟ. ಪ್ಯಾಲಿ ಇಂಥಾ ಮಂದಿ ಕಾಟ. ಒಕ್ಕೇದು ಇದಕ ತಕ್ಕ ಉಪಾಯ ಮಾಡ್ತೇನಿ.

(ಕಿವುಡನಂತೆ ನಟಿಸುವನು. ಗಟ್ಟಿಯಾಗಿ) ಏನಂದ್ರೀ?

ದೇ. ಬ್ರಾಹ್ಮಣ:— ಹಣದ ಸಹಾಯ ಮಾಡ್ರೀ ಅಂದೆ.

ರಾಮರಾಯ:— ಆಂss. ಹಿಂದುಸ್ತಾನಕ ಸ್ವರಾಜ್ಯ ಸಿಕ್ಕಾದಲ್ಲ.

ದೇ. ಬ್ರಾಹ್ಮಣ:— ಅದು ಗೊತ್ತನ ರಾಯರ. ಸ್ವಲ್ಪ ನನಗ ಹಣದ ಸಹಾಯ ಮಾಡ್ರೀ ಅಂತಾ.

ರಾಮರಾಯ— ಮುಸಲಮಾನರಿಗೆ ಪಾಕಿಸ್ತಾನನೂ ಸಿಕ್ಕಾದಲ್ಲ. ಮತ್ತೇನು ಬೇಕು?

ದೇ. ಬ್ರಾಹ್ಮಣ:— ಸ್ವಾಮಿ ನಾ ಕೇಳಿದ್ದು ದುಡ್ಡು. ಪಾಕಿಸ್ತಾನಲ್ಲ.

ರಾಮರಾಯ:— ಅದ್ಯಾಕ ಇನ್ನೆರಡು ತಿಂಗಳಿಗೆ ಕಂಟ್ರೋಲೂ ಹೋಗತದ. ಖಾನಾವಳ್ಯಾಗ ಬೇಕಾದಷ್ಟು ಊಟ ಸಿಗತದ.

ದೇ. ಬ್ರಾಹ್ಮಣ:— (ತನ್ನಷ್ಟಕ್ಕೆ) ಈ ಮಹರಾಯಾ ಕಿವುಡ ಕಾಣ ಸ್ತಾನ. (ಗಟ್ಟಿಯಾಗಿ) ಸ್ವಾಮಿ, ನನಗ ದುಡ್ಡಿನ ಸಹಾಯ ಮಾಡ್ರೀ. (ಕೈಯಿಂದ ಹಣದ ಸನ್ನೆ ಮಾಡುವನು)

ರಾಮರಾಯ:— (ಬ್ರಾಹ್ಮಣನ ಬೆರಳನ್ನು ಹಿಡಿದು ಗಟ್ಟಿಯಾಗಿ) ಏ! ಚೂರು ಅರಿವೇ ತಗೊಂಡು ತೊಯಿಸಿಗೊಂಡು ಬಾ, ಈ ಬ್ರಾಹ್ಮಣನ ಬಟ್ಟು ಏನೋ ಆಗೇದ.

ದೇ. ಬ್ರಾಹ್ಮಣ:— ( ಕೈ ಬಿಡಿಸಿಕೊಂಡು ) ನಮಸ್ಕಾರ, ಸ್ವಾಮಿ ಹೋಗಿ ಬರ್ತೇನಿ.

ರಾಮರಾಯ:— ಹೋಗಿ ಬರ್ರಿರಾ, ಒಳ್ಳೇದು, ನಮಸ್ಕಾರ, ಹೋಗಿ ಬರ್ರಿ.

ದೇ. ಬ್ರಾಹ್ಮಣ:— "ಯಂ ಯಂ ಪಶ್ಯಸಿ ತಸ್ಯ ತಸ್ಯ ಪುರತೋ ಮಾಬ್ರೂಹಿ ದೀನಂ ವಚಃ" ಎಂದು ಜ್ಞಾನಿಗಳು ಹೇಳುವದು ಸುಳ್ಳಲ್ಲ.

( ಬ್ರಾಹ್ಮಣನು ಹೋಗುವನು )

ಜಾನಕೀಬಾಯಿ:— (ಪ್ರವೇಶಿಸಿ) ಅಪ್ಪಯ್ಯಾ ರಾಮಾ, ಪಾಪ, ಆ ಬಡಬ್ರಾಹ್ಮಣಗ ಒಂದೆರಡು ದುಡ್ಡು ಕೊಟ್ಟಿದ್ರ ಇವರಿಗೇನು ಕಡಿಮಿ ಆಗತಿತ್ತು ಅಂತಿನಿ. (ರಾಮರಾಯರಿಗೆ) ಇಂಥಾಪರಿ ಜೀನತನ ಮಾಡಿನರ ಮನ್ಯಾಗ ಹೆಂಡ್ರು, ಮಕ್ಕಳೂ ಇರೋದss ಕಠಿಣಾತು. ನಿಮ್ಮ ಗುಣಕ ಸಾಕಾಗಿ ಇದ್ದೊಬ್ಬ ಮಗ ಮನ್ಯಾಗ ಇರೋಂಗಿಲ್ಲ. ಯಾಕರ ಇಷ್ಟು ಜಿಬುಟು ತನ ಮಾಡ್ತೀರೋ ಏನೋ! ನನಗಂತೂ ತಿಳೀದು!!

ರಾಮರಾಯ:— ಜೀನಾ, ಜೀನಾ ಅಂತಾ ಯಾಕ ನನ್ನ ಹೆಣಾ ಹೊರ್ತಿ? ಜೀನತನ ಯಾರ ಮಾಡೋದಿಲ್ಲ! ಒಳ್ಳೊಳ್ಳೇ ದೊಡ್ಡವರss ಈಗಿನ ಕಠಿಣ ದಿವಸದಾಗ ಜೀನತನ ಮಾಡತಾರ, ನಮ್ಮಂಥವರ ಪಾಡೇನು. ಹಿಂಗ ಮಾಡದಿದ್ರ ನಮಗ ಉಳಿಗಾಲನss ಇಲ್ಲಾ ತಿಳೀತ?

ಜಾನಕೀಬಾಯಿ:– ಈಗ್ಯಾಕ, ಮೊದಲಿನಿಂದಲೂ ಹೀಂಗss. ನೀವು ಇದ್ದೊಬ್ಬ ಮಗನ ಕೈಯಾಗ ಎಂದಾರ ಒಂದು ಬಿಲ್ಲೀ ಕೊಟ್ಟೀರಾ? ಕೇಳಬಾರದು.

ರಾಮರಾಯ:— ಮೊದಲ ಆ ದೀಪಾ ಸ್ವಲ್ಪ ಇಳಿಸು. ಮೊದಲ ಇಳಿಸೂ ಅಂತೀನಿ- (ಜಾನಕಿಬಾಯಿ ದೀಪಾ ಸ್ವಲ್ಪ ಇಳಿಸುವಳು) ಇಕಾ ಕೇಳಿಲ್ಲೆ ನಾ ಹೇಳಿದ್ರ ಸುಳ್ಳು ಅಂದಿ. ರಾಮಾಯಣ ನಿನಗ ಗೊತ್ತದನಲ್ಲss ಸೀತಾ ದೇವಿ ಗರ್ಭಿಣಿಯಾದ ಕೂಡ್ಲೆ ರಾಮದೇವ್ರು ಅವಳನ್ನು ಅಡವೀ ಯೊಳಗ ಬಿಟ್ಟು ಬಂದ. ಯಾಕ, ಗೊತ್ತದನss ನಿನಗ? ಬಾಣಂತೀ ತನದ ಖರ್ಚು ಮೈಮ್ಯಾಲ ಬರತೂದ ಅಂತ. ಇದು ಜೀನತನ ಹೌದೋ ಅಲ್ಲೋ? ಬಿಡು ಹೋಗಲಿ. ನಿನಗ ಮಹಾಭಾರತಾನೂ ಗೊತ್ತದss ಅಲ್ಲ. ಪಂಚ

ಪಾಂಡವರು ಎಲ್ಲಾರೂ ಕೂಡಿ ದ್ರೌಪದಿ ಒಬ್ಬಾಕೀನ ಮದಿವೀ ಮಾಡಿ ಕೊಂಡ್ರು. ಯಾಕ? ಒಬ್ಬೊಬ್ರು ಒಬ್ಬೊಬ್ಬಾಕೀನ ಮದಿವೀ ಮಾಡಿಕೊಂಡ್ರ ಭಾಳ ಖರ್ಚು ಬರ್ತದಂತ. ಇದು ಜೀವನದ ಪಾಠವೋ ಅಲ್ಲೋ? ಇದೂ ಹೋಗ್ಲಿ. ಮನ್ನೆ ಮನ್ನೆ ಗಾಂಧೀಮಹಾರಾಜಾ ಸತ್ತನಲ್ಲ. ಅವ ಮಹಾತ್ಮಾ ಹ್ಯಾಂಗ ಆಗಿದ್ದಾ ನಿನಗ ಗೊತ್ತದನು? ಕೇವಲ ಜೀನತನದಿಂದಾನ. ಒಂದ ಲಂಡ ಪಂಜಿ ಉಟಗೋತಿದ್ದಾ, ಒಂದು ಲಂಡ ಪಂಜೀ ಹೊತಗೋತಿದ್ದಾ. ಹಿಡಿ ಸಿಂಗಾ ಮುಕ್ಕೋದು ಇಷ್ಟು, ಕುರೀ ಹಾಲ ಕುಡ್ಯೋದು. ಹಿಂಗ ಜೀನ ತನಾ ಮಾಡಿ ಮಹಾತ್ಮಾ ಆಗಿಬಿಟ್ಟ. ಇಂಥಿಂಥವರು ಜೀನತನ ಮಾಡೋದು ನೋಡಿದ್ರ ನಮ್ಮಂಥವರು ಉಸುಲ ಸಹಿತ ಹಿಡಿದು ಬಿಡಬೇಕಾಗತದ ತಿಳೀತ್ಯs.

ಜಾನಕೀಬಾಯಿ:—(ತನ್ನಷ್ಟಕ್ಕೆ) ಎರಡು ಬಿಲ್ಲೀ ಕೇಳಿದರ ರಾಮಾ ಯಣ, ಮಹಾಭಾರತ ಎಲ್ಲಾ ಹಾರ್‍ಯಾಡ ಹೋಗ್ತಾವು.

(ಬಾಬೂ ಪ್ರವೇಶಿಸುವನು)

ಬಾಬು:— (ತನ್ನಷ್ಟಕ್ಕೆ) ಏನೋ ನಡದದಲ್ಲ ಪುರಾಣ. ಬಹುತೇಕ ದುಡ್ಡಿಂದs ಕಾಣಸ್ತದ. ದುಡ್ಡಿಗೂ ನಮ್ಮಪ್ಪನ ಜೀವಕ್ಕೂ ಗಂಟು. (ತಾಯಿಗೆ) ಏನವಾ ಅವ್ವಾ ಅದು. ಏನೋ ಬಹಳ ಹಾಕ್ಯಾಟ ನಡದಂಗ ಕಾಣಸ್ತದ?

ಜಾನಕೀಬಾಯಿ:— ಹೇಳೋದೆನೋ ಬಾಬೂ. ನಿನಗ ಗೊತ್ತs ಅದ ನಲ್ಲಾ ಎಲ್ಲಾ. ಕೀರ್ತನಕ ಹೋಗತನಿ ಎರಡು ಬಿಲ್ಲೀ ಕೊಡ್ರಿ ಅಂದ್ರ ದೊಡ್ಡ ಪುರಾಣs ನ ಎಬ್ಬಿಸಿಬಿಟ್ಟಾರ.

ಬಾಬು:— ಹೋಗಲಿ ಕೊಡಪಾ. ಏನು ಬಂಗಾರ ಬೇಡಿಲ್ಲ, ಬೆಳ್ಳೀ ಬೇಡಿಲ್ಲಾ. ಎರಡುಬಿಲ್ಲೀ ಕೇಳ್ತಾಳ.

ರಾಮರಾಯ:— (ಸಿಟ್ಟಿನಿಂದ) ಎಲೇ ಬಾಬ್ಯಾ, ಸುಮ್ಮನ ಒಳಗ ಹೋಗಿ ಕೈಕಾಲು ಮಾರೀ ತೊಳಕೋ. ಒಣಾ ಹಿರೇತನಾ ಮಾಡಬ್ಯಾಡ.

ಬಾಬು:— ಇಕಾ ಅವ್ವಾ, ತಗೋ ಎರಡು ಬಿಲ್ಲಿ; ಯಾಕ; ಒಂದ ಆಣೇ ತಗೋ. ಹೋಗಿ ಬಾ ಕೀರ್ತನಕ. ಈ ಮಹಾರಾಯನ್ನ ಕೇಳಿದರ ಅವ ಕೊಡಲಿಲ್ಲ. ನೀ ಹೋಗಲಿಲ್ಲ.

ರಾಮರಾಯ:- ಎಲೇ

ಬಾಬು:— ನಮ್ಮಪ್ಪನ್ನೂ ಅಂತಾ ಕೊಡ್ತನಿ (ಕೊಡಲುಹೋಗುವನು)

ರಾಮರಾಯ— ಹಾ! ಭಾಳ ಶ್ಯಾಣ್ಯಾ ಆಗಿ ಮಾತಾಡತೀದಿ. ತಾ ಇಲ್ಲಿ ಆ ಆಣೇನ (ಕಸಿದುಕೊಳ್ಳುವನು.)

ಬಾಬು:— ಅವ್ವಾ, ಸಾಕು ಈ ಮಾರಾಯನ ಸಂಗತಿ. ನನಗಂತೂ ಸಾಕಾಗಿ ಹೋಗೇದ. ಅವ್ವಾ ನಾ ಸ್ವಚ್ಛ ಹೇಳ್ತೀನಿ. ಈ ಮನೀ ಎರಡು ಭಾಗ ಮಾಡು. ಒಂದು ಅಪ್ಪನ ಸ್ಥಾನ ಆಗ್ಲಿ. ಮತ್ತೊಂದು ಅವ್ವನ ಸ್ಥಾನ ಆಗಲಿ. ದೇಶಕ್ಕ ದೇಶನss ಭಾಗ ಆಗಿ ಹೋಗ್ತಾವಂತ! ನಮ್ಮ ಮನೀ ಯಾರ ಕೇಳಬೇಕು? ಇಡೀ ಹಿಂದುಸ್ತಾನ ಒಡೆದು ಒಂದು ಭಾರತ ಮತ್ತೊಂದು ಪಾಕಿಸ್ತಾನ ಆಗಲಿಲ್ಲಾ?

ರಾಮರಾಯ— (ಹುಬ್ಬುಗಂಟಿಕ್ಕಿ) ಹೂಂ! ಹೂಂ! ಮನೀನ ಭಾಗ ಮಾಡ್ತೀ? ಮಾಡಿದರ ಬಚ್ಚಲಮನಿಯಾರದು.

ಬಾಬು:— ಬಚ್ಚಲಮನೀನss. ಪಡಸಾಲಿ ನಿಂದು. ಅಡಗೀಮನಿ ಅವ್ವಂದು. ಭೌಗೋಲಿಕ ದೃಷ್ಟಿಯಿಂದ ವಿಚಾರ ಮಾಡಿದರ ಬಚ್ಚಲಮನಿ ಅವ್ವಂದು. ಯಾಕಂದ್ರ ಆದು ಅಡಗೀಮನೀ ಸಮೀಪಕ್ಕ ಅದ ಮತ್ತು ಎರಡೂ ಮನಿ ನಡುವೆ ಬಾಗಲದ.

ಜಾನಕೀಬಾಯಿ:- (ನಗುತ್ತ) ಅಲ್ಲೋ ಬಾಬೂ, ತಿಜೂರಿ ಖೋಲಿ ಯಾರದು?

ಬಾಬು:— ಆರ್ಥಿಕ ದೃಷ್ಟಿಯಿಂದ ವಿಚಾರ ಮಾಡಿದರ ತಿಜೋರಿ ಖೋಲಿ ನನ್ನು.

ರಾಮರಾಯ:— ಭಪ್ಪರೇ, ಲುಚ್ಚಾ. ತಂದೀ ತಾಯಿ ನಡುವೆ ಜಗಳಾಹಚ್ಚಿ ಮನೀ ಎರಡು ಮಾಡೋ ಮಗಾ ಭಾಳ ಸಂಭಾವಿತ ಹಟ್ಟಿದೆಲ್ಲಾ! ಆ ಲಾರ್ಡ ಮೌಂಟಬ್ಯಾಟನ್ನಗ ನೀ ಏನಾಗಬೇಕಪಾ ಮಗನss?

ಬಾಬು:— ಮತ್ತೇನಪಾ ಹಿಂಗ ಅಪ್ಪನ ಜೀವಾ ತಿಂಪ್ರ?

ರಾಮರಾಯ:— ಥೂ ಹುಚ್ಚಪ್ಪಾ. ಹಿಂಗ್ಯಾಕ ಸಿಟ್ಟು ಮಾಡ್ತೀದಿ? ಏನೋ ಗಂಡಾ ಹೆಂಡರ ಮಾತು. ಇದೇನು ಜಗಳೇನಪಾ? (ಹೆಂಡತಿಗೆ) ನೀನರ ಹೇಳss ಹುಡಗ್ಗ ಬುದ್ಧೀ.

ಜಾನಕೀಬಾಯಿ— ನಿಮದೇನು ಮಾತೋ, ಜಗಳೋ, ಯಾವದೂ ತಿಳಿವಲ್ದು ನನಗ

ಬಾಬು:— ಹಂಗರ ಇದೇನು ಜಗಳಲ್ಲ?.

ರಾಮರಾಯ:— ಛೀ, ಹುಚ್ಚಾ, ಇದು ಜಗಳಲ್ಲ. ಗಂಡಾ ಹೆಂಡರ ಪ್ರೇಮ ಕಲಹಾ. ನಾಳೆ ನಿನ್ನ ಹೆಂಡಂತಿ ಬಂದ ಮ್ಯಾಲ ತಿಳೀತವ ನಿನಗ. ಜಗಳಾಯಾವದು, ಮಾತಯಾವದು ಅಂಬೋದು.

ಬಾಬು:— ಹಂಗರ ಅಪ್ಪಗ ಎರಡು ಬಿಲ್ಲೀ ಕೊಟ್ಟುಬಿಡು. ಕೀರ್ತನಕ ಹೋಗಿ ಬರ್ಲೀ.

ರಾಮರಾಯ:— ಕೊಡತೇನೋ ಮಾರಾಯಾ, (ಹೆಂಡತಿಗೆ ಕಿಸೆಯಿಂದ ಅನುಮಾನಿಸುತ್ತ ಎರಡು ಬಿಲ್ಲೀ ತೆಗೆದು ಕೊಡುತ್ತ) ಇಕಾ, ಜ್ವಾಕಿ, ಹಣದ ಕೆಲಸ. ಕಳಕೊಂಡೀ ಅಂದ್ರ ಮತ್ತೊಮ್ಮೆ ಕೊಡಲಿಕ್ಕಿಲ್ಲಾ. ತಿಳಿತ?

(ಶಂಕರ ಶಾಸ್ತ್ರಿಗಳು ಪ್ರವೇಶಿಸುವರು)

ಶಂಕರಶಾಸ್ತ್ರಿ:— ರಾಯರss ರಾ

ಬಾಬು:—(ಹೊರಗೆ ಹೋಗಿ ನೋಡಿ) ಅಪ್ಪಾ, ಶಂಕರ ಶಾಸ್ತ್ರಿಗಳು ಬಂದಾರಪಾ.

ರಾಮರಾಯ:— ಬರ್ರಿ, ಬರ್ರಿ, ಶಾಸ್ತ್ರಿಗಳೇ ನಮಸ್ಕಾರ. ಮತ್ತೇನು ಕತ್ತಲದಾಗ ಇತ್ತ್ಲಾಗ ಬಂದ್ರೀ?

ಶಾಸ್ತ್ರಿ:—ಏನೂ ಇಲ್ಲ. ಇಲ್ಲೆ ಈಶ್ವರ ದೇವರ ಗುಡ್ಯಾಗ ಕೀರ್ತನ ಇತ್ತು ಅಂತಾ ಹೋಗಿದ್ದೆ. ಪಾಪ, ಕೀರ್ತನಕಾರಗ ಜಡ್ತು ಆಗೇದಂತ. ಕೀರ್ತನನss ಬಂದಾತಂತ ತಿರುಗಿ ಬಂದೆ. ಏನ್ರೋ ಹಂಗss ಹೋಗೋದ ನಿಮ್ಮನ್ನ ಭೆಟ್ಟಿಯಾಗಿ ಹೋಗೋಣು ಅಂತಾ ಬಂದೆ.

ರಾಮರಾಯ:— (ಆನಂದದಿಂದ) ಏನ್ರೀ, ಕೀರ್ತನ ಇಲ್ಲಾ ಹಂಗರ?

ಶಾಸ್ತ್ರಿ:— ಹೌದ್ರಿ. ಕೀರ್ತನ ಇಲ್ಲಾ.

ರಾಮರಾಯ:— (ಗಟ್ಟಿಯಾಗಿ ಹೆಂಡತಿಗೆ) ಕೇಳಿದೇನss? ಕೀರ್ತನ ಬಂದ. ಕೀರ್ತನಕಾರಗ ಜಡ್ತ ಆಗೇದಂತ.

ಜಾನಕೀಬಾಯಿ:— ಕೀರ್ತನ ಬಂದಾತsss ಭಾಳ ಚಲೋ ಆತು. ಏನರ ಆಗಲಿ, ಯಾರ ಪುಣ್ಯದಿಂದ ಕೀರ್ತನ್ಯೂ ಬಂದಾತು. ನಿಮ್ಮ ಎರಡು ಬಿಲ್ಲೀನು ಉಳಿದವು. ಇಕಾ ತಗೊಳ್ರೀ ನಿಮ್ಮ ಎರಡು ಬಿಲ್ಲಿ

(ತಿರುಗಿ ಕೊಡುವಳು)

**ತೆರೆ ಬೀಳುವದು**

---

## ನಿವೇದನೆ

ಇದೊಂದು ಸಮಾಜ ಜೀವನ ಸಾಗಿಸುವ ವಿವಿಧ ವ್ಯಕ್ತಿಗಳಲ್ಲಿ ಒಂದು ವ್ಯಕ್ತಿ. ಯಾವ ವ್ಯಕ್ತಿಯನ್ನೂ ಉದ್ದೇಶವಾಗಿಟ್ಟುಕೊಂಡಿರದೆ ಸಮಾಜದಲ್ಲಿ ಇದ್ದ, ಇರ ಬಹುದಾದ ವ್ಯಕ್ತಿಯ ಚಿತ್ರವಾಗಿದೆ. ಸುಹೃದಯ ವಾಚಕರು ಓದಿ ಇಲ್ಲವೆ ಪ್ರಯೋಗಿಸಿ ಆನಂದಪಟ್ಟರೆ ಸಾಕು. ಅಷ್ಟೇ ಪ್ರಯತ್ನ ಸಫಲವಾಯಿತೆಂದೇ ಭಾವಿಸುವೆ.